



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 84

ಸಂಪುಟ: ೧೦ ಸಂಚಿಕೆ: ೦೭
Vol. 10 Issue: 07

ಪುಟಗಳು ೮
Pages - 8

ವಾರ್ಷಿಕ ಚಂದಾ ರೂ. ೨೦/-
A. Sub. - Rs. 20/-

ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್
Editor : Sri. B.R. Ravindranath

ಶ್ರೀ ಶಕ ೧೯೪೪ ಶುಭಕೃತ ನಾಮ ಸಂವತ್ಸರ– ದಕ್ಷಿಣಾಯಣ– ವರ್ಷ ಋತು ಚಾಂದ್ರಮಾನ –ಕಾರ್ತಿಕ –ಮಾರ್ಗಶಿರ ಮಾಸ ಸೌರಮಾನ ಸಿಂಹ–ಕನ್ಯಾ

## ಬಿ.ಎಂ.ಶ್ರೀ. ಪ್ರತಿಷ್ಠಾನದ ಸದಸ್ಯರಿಗೆ ಹಾಗೂ 'ಹೊಂಗನಸು' ಓದುಗರಿಗೆ ೬೭ ನೇ ಕನ್ನಡ ರಾಜ್ಯೋತ್ಸವದ ಶುಭಾಶಯಗಳು







## ಬಿ.ಎಂ.ಶ್ರೀ. ಪ್ರತಿಷ್ಠಾನದ ನೂತನ ಗೌರವಾಧ್ಯಕ್ಷರಾಗಿ ಡಾ. ಪಿ.ವಿ. ನಾರಾಯಣ



ಜನಪ್ರಿಯ ಲೇಖಕ, ವಿದ್ವಾಂಸ, ಎಲ್ಲರ ಪ್ರೀತಿಗೂ ಪಾತ್ರರಾದ ಬಿಎಂಶ್ರೀ ಪ್ರತಿಷ್ಠಾನದ ಮಾಜಿ ಅಧ್ಯಕ್ಷ ಡಾ. ಪಿ.ವಿ. ನಾರಾಯಣ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌರವಾಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದಾರೆ. ದಿನಾಂಕ ೩೦ನೇ ಸೆಪ್ಟೆಂಬರ್ ೨೦೨೨ ರಂದು ನಡೆದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಈ ಮಹತ್ವದ ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ಡಾ. ಎಂ. ಹೆಚ್. ಕೃಷ್ಣಯ್ಯ ಅವರು ದಿನಾಂಕ ೧೨ನೇ ಆಗಸ್ಟ್ ರಂದು ನಿಧನರಾದ ಕಾರಣದಿಂದ ಗೌರವಾಧ್ಯಕ್ಷರ ಸ್ಥಾನ ತೆರವಾಗಿತ್ತು.

## ಬಿ.ಎಂ.ಶ್ರೀ. ಪ್ರತಿಷ್ಠಾನದ ಕೋಶಾಧಿಕಾರಿ ಡಾ. ಎಸ್. ಅನಿಲ್‌ಕುಮಾರ್ ನಿವೃತ್ತಿ



ದಿನಾಂಕ ೩೦ ಸೆಪ್ಟಂಬರ್ ೨೦೨೨ರಂದು ಬಿ.ಎಂ.ಶ್ರೀ.ಪ್ರತಿಷ್ಠಾನದ ಗೌರವ ಕೋಶಾಧಿಕಾರಿ ಡಾ. ಅನಿಲ್‌ಕುಮಾರ್ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ೨ ವರ್ಷ ಆಂತರಿಕ ಪರಿಶೋಧಕರಾಗಿ ನಂತರ ಆರುವರ್ಷಗಳ ಕಾಲ ಕೋಶಾಧಿಕಾರಿಯಾಗಿ, ಸಂಸ್ಥೆಯ ಲೆಕ್ಕಪತ್ರ, ಲೆಕ್ಕಪರಿಶೋಧನೆ, ಆದಾಯ ತೆರಿಗೆ ಇಲಾಖೆ ಸಂಬಂಧಿತ ಕಾರ್ಯಗಳನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸಿ ನಿಯಮಾನುಸಾರ ತಮ್ಮ ಸ್ಥಾನದಿಂದ ನಿವೃತ್ತಿ ಪಡೆದಿದ್ದಾರೆ.

## ಬಿ.ಎಂ.ಶ್ರೀ. ಪ್ರತಿಷ್ಠಾನದ ನೂತನ ಕೋಶಾಧಿಕಾರಿ ಡಾ. ಪ್ರಭಾಕರ್ ಬೆಲವಾಡಿ



ಬಿ. ಎಂ. ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯ ಡಾ. ಪ್ರಭಾಕರ್ ಬೆಲವಾಡಿ ಅವರು ಬಿ. ಎಂ. ಶ್ರೀ. ಪ್ರತಿಷ್ಠಾನದ ನೂತನ ಗೌರವ ಕೋಶಾಧಿಕಾರಿಯಾಗಿ ಈಗ ಅಧಿಕಾರ ಸ್ವೀಕರಿಸಿದ್ದಾರೆ. ಶ್ರೀಯುತರು ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರು ಮತ್ತು ಕವಿ. ಇವರಿಗೆ ಅಭಿನಂದನೆಗಳು ಹಾಗೂ ಶುಭ ಹಾರೈಕೆಗಳು.



ಚಂದಾ ವಿವರಗಳು
ವಾರ್ಷಿಕ ಚಂದಾ : ರೂ. ೨೦/-
ಐದು ವರ್ಷಗಳ ಚಂದಾ : ರೂ. ೧೦೦/-

ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ಮೊಬೈಲ್ : ೯೭೨೮೧೨೧೨೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–30ಗಂಟೆ.
ವಾರದ ಎಲ್ಲ ದಿನಗಳಲ್ಲೂ ಕಚೇರಿ ಕಾರ್ಯ ನಿರ್ವಹಿಸುತ್ತದೆ.

## ಸಂಪಾದಕೀಯ

ನೂತನ ಗೌರವ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರಿಗೆ ಮತ್ತು ನೂತನ ಕೋಶಾಧಿಕಾರಿ ಡಾ. ಪ್ರಭಾಕರ ಬೆಲವಾಡಿ ಅವರಿಗೆ ಅಭಿನಂದನೆಗಳು.

ನಾಡಿನಾದ್ಯಂತ ಸಾಹಿತ್ಯಕ ಚಟುವಟಿಕೆಗಳನ್ನು ಹೆಚ್ಚು ಹೆಚ್ಚು ಉತ್ಸಾಹದಿಂದ ನಡೆಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ.

ಬಿಎಂಶ್ರೀ ಪ್ರತಿಷ್ಠಾನವು ಸಹ ಹೆಚ್ಚು ವೈವಿಧ್ಯಮಯ ಚಟುವಟಿಕೆಗಳನ್ನು ನಡೆಸಿಕೊಂಡು ಬರಲಿದೆ. ನಾವೆಲ್ಲರೂ ಸಕ್ರಿಯವಾಗಿ ಭಾಗವಹಿಸಿದಲ್ಲಿ ಈ ಚಟುವಟಿಕೆಗಳು ಹೆಚ್ಚು ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

– ಬಿ.ಆರ್. ರವೀಂದ್ರನಾಥ್

### ಕಿರು ಪರಿಚಯ

### ಶಾ. ಬಾಲುರಾವ್

**ಅಕ್ಟೋಬರ್ ೧೯೨೫ – ೧೮-೦೧-೨೦೦೧**



ಶಾ. ಬಾಲುರಾವ್ ಅವರು ವಿದ್ಯಾಭ್ಯಾಸದ ನಂತರ ಕೆಲಕಾಲ ಪತ್ರಕರ್ತರಾಗಿ ಕೆಲಸ ಮಾಡಿದರು. ೧೯೫೭ರಲ್ಲಿ ಅವರು ಸಾಹಿತ್ಯ ಅಕಾಡೆಮಿಯಲ್ಲಿ ಪ್ರಕಟನಾ ಸಹಾಯಕರಾಗಿ ಸೇರಿದರು. ನಂತರ ಜರ್ಮನ್ ಸಾಹಿತ್ಯದ ಸಹಾಯಕ ಸಂಪಾದಕರಾದರು. ಮುಂದೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಟಿಸುವ 'ಇಂಡಿಯನ್ ಲಿಟರೇಚರ್' ಇಂಗ್ಲಿಷ್ ಪತ್ರಿಕೆಯ ಸಂಪಾದಕರಾಗಿ ೧೯೯೦ರಲ್ಲಿ ನಿವೃತ್ತರಾದರು. ನಂತರ ಅವರ ಕೊನೆಗಾಲದವರೆಗೆ ದೆಹಲಿಯಲ್ಲೇ ವಾಸವಾಗಿದ್ದರು. ಅವರು ೧೮ನೇ ಜನವರಿ ೨೦೦೧ ರಂದು ಹಠಾತ್ ಸಂಭವಿಸಿದ ಹೃದಯಾಘಾತದಿಂದ ನಿಧನ ಹೊಂದಿದರು. ಶಾ. ಬಾಲುರಾವ್ ಅವರ ಹದಿನೆಂಟು ಕೃತಿಗಳು ಲಭ್ಯವಾಗಿವೆ. ಅವುಗಳಲ್ಲಿ ಎಂಟು ಕವನ ಸಂಕಲನಗಳಿವೆ. ಅದರಲ್ಲೊಂದು ಇಂಗ್ಲಿಷ್ ಕವಿತೆಗಳ ಸಂಕಲನ. ನಾಲ್ಕು ವಿವಿಧ ಭಾಷಾಕವಿಗಳ ಕವನಗಳನ್ನು ಆಯಾ ಭಾಷೆಗಳಿಂದಲೇ ನೇರವಾಗಿ ಅನುವಾದ ಮಾಡಿದ ಕವನಗಳನ್ನು ಒಳಗೊಂಡಿವೆ. ಎರಡು ಸ್ವತಂತ್ರ ಕಿರು ನಾಟಕಗಳಿವೆ; ಜೊತೆಗೆ ಮಕ್ಕಳಿಗಾಗಿ ರಚಿಸಿದ ನಾಲ್ಕು ಕೃತಿಗಳಿವೆ; ಮೂರು ಅನುವಾದಿತ ಕೃತಿಗಳಿವೆ: ರಷ್ಯನ್ ಭಾಷೆಯನ್ನು ಕಲಿತು ಆನಾ ಆಹ್ಮತೋವಾಳ ಕವಿತೆಗಳನ್ನು ಕನ್ನಡಕ್ಕೆ ನೇರವಾಗಿ ಅನುವಾದ ಮಾಡಿರುವುದು, ಬೆರ್ಟೋಲ್ಟ್ ಬ್ರೆಷ್ಟ್ ರ ಎಂಬತ್ತು ಕವಿತೆಗಳನ್ನು ಜರ್ಮನ್ ಭಾಷೆಯಿಂದ ನೇರವಾಗಿ ಕನ್ನಡಕ್ಕೆ ಅನುವಾದ ಮಾಡಿರುವುದು, ಬಂಗಾಳಿಯಿಂದ ನೇರವಾಗಿ ಸುಭಾಷ್ ಮುಖೋಪಾಧ್ಯಾಯ ಅವರ ಕವಿತೆಗಳನ್ನು ಕನ್ನಡಕ್ಕೆ ಅನುವಾದ ಮಾಡಿರುವುದು, ಉಮರ್ ಖಯ್ಯಾಮ್ ನ ೧೦೧ ರೂಬಾಯಿಗಳ ಅನುವಾದ ಮಾಡಿರುವುದು, ಶಾ. ಬಾಲುರಾವ್ ಅವರ ದೊಡ್ಡ ಸಾಧನೆಗಳು. ನಮ್ಮ ಸಾಹಿತ್ಯಕ್ಕೆ ಅವರು ಕೊಟ್ಟ ಮತ್ತೊಂದು ದೊಡ್ಡ ಕೊಡುಗೆಯೆಂದರೆ 'ಷೇಕ್‌ಸ್ಪಿಯರ್‌ಗೆ ನಮಸ್ಕಾರ'. ಈ ಪುಸ್ತಕ ಕನ್ನಡದಲ್ಲಿ ಯಾರೂ ಮೀರಲಾಗದ ಎತ್ತರವೊಂದನ್ನು ತೋರಿಸಿಕೊಟ್ಟಿದೆ. ಅವರು ಈ ಪುಸ್ತಕದ ಸಂಪಾದಕರಾಗಿದ್ದರು. ಜೀವನ ಪರ್ಯಂತ ಶಾ. ಬಾಲುರಾವ್ ಅವರು ಅನುವಾದದೆಡೆಗೆ ಬಹುವಾಗಿ ಆಕರ್ಷಿತರಾದವರಾಗಿದ್ದರು. ಜೊತೆಗೆ ಅವರು ಯುವಜನರನ್ನು ಹಲವು ರೀತಿಗಳಲ್ಲಿ ಪ್ರೋತ್ಸಾಹಿಸುತ್ತಿದ್ದರು. ಈ ಕಾರಣದಿಂದ ಅವರ ಪತ್ನಿ ಶ್ರೀಮತಿ ಕಮಲಿನಿ ಅವರು ಶಾ. ಬಾಲುರಾವ್ ಅನುವಾದ ಪ್ರಶಸ್ತಿ ಹಾಗೂ ಶಾ. ಬಾಲುರಾವ್ ಯುವಬರಹಗಾರ ಪ್ರಶಸ್ತಿಗಳ ದತ್ತಿಯನ್ನು ಬಿಎಂಶ್ರೀ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುತ್ತಾರೆ. ಶ್ರೀಮತಿ ಕಮಲಿನಿ ಅವರು ಬಿಎಂಶ್ರೀ ಅವರ ಮೊಮ್ಮಗಳು, ಅಂದರೆ ಅವರ ಮಗಳ ಮಗಳು.

೨೭-೦೯-೨೦೨೨

### ಡಾ.ಕೆ.ರಾಜೇಶ್ವರಿ ದೊಡ್ಡರಂಗೇಗೌಡ ಸ್ಮಾರಕ ದತ್ತಿ ಕಾರ್ಯಕ್ರಮ

**ವಿಷಯ : ಡಾ. ಕೆ. ರಾಜೇಶ್ವರಿಗೌಡ ಅವರ ಕಥಾಂತರಂಗ**

**ಉಪನ್ಯಾಸಕರು : ಡಾ. ಶಾಂತರಾಜು**




ಡಾ. ದೊಡ್ಡರಂಗೇಗೌಡ ಅವರು ತಮ್ಮ ಧರ್ಮಪತ್ನಿ ಡಾ. ರಾಜೇಶ್ವರಿಗೌಡ ಅವರ ಹೆಸರಿನಲ್ಲಿ ಸ್ಥಾಪಿಸಿರುವ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಡಾ. ಶಾಂತರಾಜು ಅವರು 'ರಾಜೇಶ್ವರಿಗೌಡ ಅವರ ಕಥೆಗಳ ಅಂತರಂಗ' ಕುರಿತು ವಿಶೇಷ ಉಪನ್ಯಾಸ ಮಾಡಿದರು. ೧೦ ವರ್ಷಗಳ ಅವಧಿಯಲ್ಲಿ ಬರೆದ ೯ ಕತೆಗಳು ಬಹಳ ಮಹತ್ವಪೂರ್ಣವಾದವು. ಅವುಗಳಲ್ಲಿ ೪ ಕತೆಗಳು ಐತಿಹಾಸಿಕ ವಸ್ತುವುಳ್ಳವು, ಉಳಿದೈದು ಕತೆಗಳು ಸಮಕಾಲೀನ ಸಾಮಾಜಿಕ ವಸ್ತುವನ್ನು ಹೊಂದಿವೆ. ಡಾ. ಚಿದಾನಂದಮೂರ್ತಿಯವರು ೧೭ನೇ ಶತಮಾನಕ್ಕೆ ಸೇರಿದ ಶೃಂಗೇರಿ ಮಠದಲ್ಲಿನ ದಾಖಲೆಯನ್ನು ಉಲ್ಲೇಖಿಸಿ ಬರೆದ 'ಹೆಣ್ಣುಗಳ ಮಾರಾಟ' ಎಂಬ ಲೇಖನವನ್ನಾಧರಿಸಿ 'ನಿರ್ಣಯ' ಕಥೆಯನ್ನು ಅಂತರಂಗಕ್ಕೆ ಮುಟ್ಟುವಂತೆ ಚಿತ್ರಿಸಿದ್ದಾರೆ. ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ವೀರ ಪ್ರಧಾನ ಅಂಶವನ್ನು 'ಅರ್ಪಣೆ'ಯಲ್ಲಿ ಚಿತ್ರಿಸಿದರೆ, ಸೈಬೀರಿಯಾ ಕತೆಯಲ್ಲಿ ತನ್ನ ಮಗಳು ಶತ್ರುವನ್ನು ಪ್ರೀತಿಸಿದಳೆಂಬ ಕಾರಣಕ್ಕೆ ಅವಳನ್ನು ಕೊಂದ ವಿಕೃತಿಯನ್ನು 'ಸೆರೆಯಾಳಿನ ಸೇಡು' ಕತೆಯಲ್ಲಿ ಚಿತ್ರಿಸಿದ್ದಾರೆ. ಯುದ್ಧವು ಕ್ಷತ್ರಿಯನಿಗೆ ಮೀಸಲು. ತಾನು ಕ್ಷತ್ರಿಯನಲ್ಲದೆ ಬೇರೆ ಯಾರೊಡನೆಯೂ ಯುದ್ಧ ಮಾಡುವುದಿಲ್ಲ ಎಂದು ತನ್ನನ್ನೇ ಕೊಂದುಕೊಂಡ ಒರಿಸ್ಸಾ ವೀರ ರವಿತೇಜವರ್ಮನ ಕತೆ 'ಪ್ರತಿಷ್ಠೆ'ಯಲ್ಲಿ ಮೂಡಿಬಂದಿದೆ. ಹಾಗೆಯೇ ಉಳಿದ ಐದು ಕತೆಗಳಲ್ಲಿ ಸೂಲಗಿತ್ತಿಯ ಬುದ್ಧಿವಂತಿಕೆ, ಬಾಡಿಗೆದಾರರ ಬವಣೆಗಳು, ಸಂಕಟಗಳು, ಸೈನಿಕರ ಗುಂಡಿಗೆ ಬಲಿಯಾದ ಅಮಾಯಕ ಮಗುವಿನ ಚಿತ್ರಣ, ಹೆಂಡತಿಯ ಮೋಜಿನಿಂದ ಎಲ್ಲವನ್ನೂ ಕಳೆದುಕೊಂಡ ಗಂಡನ ಸ್ಥಿತಿ, ಬದಲಾದ ಸೊಸೆಯ ಮನಸ್ಥಿತಿ ಮುಂತಾದ ವರ್ತಮಾನದ ಸಂಗತಿಗಳನ್ನು ಅದ್ಭುತವಾಗಿ ಕಟ್ಟಿಕೊಡಲಾಗಿದೆ ಎಂದು ವಿವರವಾಗಿ ವಿಶ್ಲೇಷಿಸಿದರು. ಮುಖ್ಯ ಅತಿಥಿಗಳಾದ, ೧೦೬ ಸಿನಿಮಾಗಳನ್ನು ನಿರ್ದೇಶಿಸಿ ಜನಪ್ರಿಯರಾದ ಓಂ ಸಾಯಿಪ್ರಕಾಶ್ ಅವರು ದೊಡ್ಡರಂಗೇಗೌಡ ದಂಪತಿಗಳ ಮಧುರ ಬಾಂಧವ್ಯವನ್ನು ಬಣ್ಣಿಸಿದರು.

ದೊಡ್ಡರಂಗೇಗೌಡ ಅವರು ಉಪನ್ಯಾಸವನ್ನು ಮೆಚ್ಚಿಕೊಂಡು ಪ್ರತಿಯೊಬ್ಬರನ್ನೂ ಸ್ಮರಿಸಿಕೊಂಡರು. ಡಾ. ಬೈರಮಂಗಲ ರಾಮೇಗೌಡ ಅವರು ಪ್ರಾಸ್ತಾವಿಕವಾಗಿ ಮಾತನಾಡಿ, ದೊಡ್ಡರಂಗೇಗೌಡ ಮತ್ತು ರಾಜೇಶ್ವರಿಗೌಡ ಅವರ ಪ್ರೇಮ, ಬದುಕು, ಬವಣೆಯನ್ನು ಅದ್ಭುತವಾಗಿ ಕಟ್ಟಿಕೊಟ್ಟರು. ಕಾರ್ಯಕ್ರಮವನ್ನು ಶ್ರೀ ಬಿ.ಎಸ್.ಗುರುಪ್ರಸಾದ್ ನಿರ್ವಹಣೆ ಮಾಡಿದರು. ಡಾ. ಪ್ರಭಾಕರ ಬೆಲವಾಡಿಯವರ ಸ್ವಾಗತ ಮತ್ತು ವಂದನಾರ್ಪಣೆ, ಶ್ರೀ ಆನಂದ ಮಾದಲಗೆರೆಯವರಿಂದ ನಾಡಗೀತೆ ಗಾಯನ ಮತ್ತು ಶ್ರೀ ಶ್ರೀನಿವಾಸ ಯಜಮಾನ್ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಅರ್ಥಪೂರ್ಣವಾಗಿ ಮೂಡಿಬಂದಿತು.

# ನವೆಂಬರ್ ೨೦೨೨ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

೧೬-೧೧-೨೦೨೨ ಬುಧವಾರ ಸಂಜೆ : ೫.೦೦ಕ್ಕೆ

**ಸರ್.ಸಿ.ವಿ.ರಾಮನ್ ವಿಜ್ಞಾನ ಉಪನ್ಯಾಸ ದತ್ತಿ ಕಾರ್ಯಕ್ರಮ**

**ವಿಷಯ : ಸರ್.ಸಿ.ವಿ.ರಾಮನ್ ಅವರ ವ್ಯಕ್ತಿತ್ವ ಮತ್ತು ಸಾಧನೆ**

**ಉಪನ್ಯಾಸಕರು : ಡಾ. ಪ್ರಭಾಕರ ಬೆಲವಾಡಿ**

ನಿವೃತ್ತ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ

೨೫-೧೧-೨೦೨೨ ಶುಕ್ರವಾರ ಸಂಜೆ : ೫.೦೦ಕ್ಕೆ

**ತೀ.ನಂ.ಶ್ರೀ. ವಿಶೇಷ ಉಪನ್ಯಾಸ ದತ್ತಿ ಕಾರ್ಯಕ್ರಮ**

**ವಿಷಯ : ತೀ.ನಂ.ಶ್ರೀ. ಅವರ ಲಲಿತ ಪ್ರಬಂಧಗಳು**

**ಉಪನ್ಯಾಸಕರು : ಡಾ.ಪಿ. ನಂಜುಂಡ**

ಸಹ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು

## ಪ್ರಕಟಣೆಗಳು

### ಶ್ರೀಮತಿ ಜಿ.ಪಿ. ಶೈಲಜ ಅವರಿಗೆ ಶಾ. ಬಾಲುರಾವ್ ಅನುವಾದ ಪ್ರಶಸ್ತಿ



ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ಶ್ರೇಷ್ಠ ಅನುವಾದಿತ ಕೃತಿಯೊಂದಕ್ಕೆ ಕೊಡಲಾಗುವ ೨೦೨೨ರ ಶಾ.ಬಾಲುರಾವ್ ಅನುವಾದ ಪ್ರಶಸ್ತಿಗೆ ಜಿ.ಪಿ. ಶೈಲಜ ಅವರ 'ಮೈಸೂರು, ಕೆನರಾ ಮತ್ತು ಮಲಬಾರ್ ಪ್ರಾಂತ್ಯಗಳ ಮೂಲಕ ಮದ್ರಾಸಿನಿಂದ ಒಂದು ಪಯಣ - ಫ್ರಾನ್ಸಿಸ್ ಬುಕನನ್' ಕೃತಿ ಆಯ್ಕೆಯಾಗಿದೆ. ರೂ. ೨೫,೦೦೦/- ನಗದು ಮತ್ತು ಸ್ಮರಣಿಕೆಯನ್ನು ಒಳಗೊಂಡಿರುವ ಪ್ರಶಸ್ತಿಯನ್ನು ಅಕ್ಟೋಬರ್ ३೦ರಂದು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆಯುವ ಸಮಾರಂಭದಲ್ಲಿ ಪ್ರದಾನ ಮಾಡಲಾಗುವುದು.

"ಶೈಲಜ ಅವರು ಮೂಲ ಇಂಗ್ಲಿಷ್ ಕೃತಿ ಆಧರಿಸಿ ಅನುವಾದ ಮಾಡುವಾಗ ಸಾಕಷ್ಟು ಸವಾಲುಗಳನ್ನು ಎದುರಿಸಿದ್ದಾರೆ. ವಿಜ್ಞಾನ, ತಂತ್ರಜ್ಞಾನದ ಅನೇಕ ಅಂಶಗಳ ಪ್ರಸ್ತಾವ ಈ ಕೃತಿಯಲ್ಲಿರುವದರಿಂದ ಮೂಲವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಸಮರ್ಪಕವಾಗಿ ಅನುವಾದ ಮಾಡುವುದು ಕಷ್ಟ. ಸೃಜನಶೀಲ ಕೃತಿಗಳ ಅನುವಾದಕ್ಕಿಂತ ಭಿನ್ನವಾಗಿ ಆಸಕ್ತಿ, ಪ್ರಾಮಾಣಿಕ ಶ್ರಮ, ಭಾಷಾ ಪ್ರೌಢಿಮೆ ಈ ಎಲ್ಲವನ್ನೂ ಬೇಡುವ ಇಂಥ ಕೃತಿಯ ಅನುವಾದ ಕಾರ್ಯದಲ್ಲಿ ಶೈಲಜ ಯಶಸ್ವಿಯಾಗಿದ್ದಾರೆ" ಎಂದು ಅನುವಾದ ಕೃತಿಗಳ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯರಾದ ಡಾ. ಜಿ.ರಾಮಕೃಷ್ಣ ಮತ್ತು ಡಾ. ಟಿ.ಆರ್. ಅನಂತರಾಮು ಅಭಿಪ್ರಾಯಪಟ್ಟಿದ್ದಾರೆ.

### ಶ್ರೀಇಸ್ಮಾಯಿಲ್ ತಳಕಲ್ ಅವರಿಗೆ ಶಾ. ಬಾಲುರಾವ್ ಯುವಬರಹಗಾರ ಪ್ರಶಸ್ತಿ



ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ಯುವ ಲೇಖಕರ ಅತ್ಯುತ್ತಮ ಕೃತಿಗೆ ಕೊಡಲಾಗುವ ೨೦೨೧ರ ಶಾ.ಬಾಲುರಾವ್ ಯುವಬರಹಗಾರ ಪ್ರಶಸ್ತಿಗೆ ಇಸ್ಮಾಯಿಲ್ ತಳಕಲ್ ಅವರ 'ಬೆತ್ತಲೆ ಸಂತ' ಕೃತಿ ಆಯ್ಕೆಯಾಗಿದೆ. ರೂ. ೨೫,೦೦೦/- ನಗದು ಮತ್ತು ಸ್ಮರಣಿಕೆಯನ್ನು ಒಳಗೊಂಡಿರುವ ಪ್ರಶಸ್ತಿಯನ್ನು ಅಕ್ಟೋಬರ್ ३೦ರಂದು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆಯುವ ಸಮಾರಂಭದಲ್ಲಿ ಪ್ರದಾನ ಮಾಡಲಾಗುವುದು.

"ಇಸ್ಮಾಯಿಲ್ ತಳಕಲ್ ಅವರು ಪ್ರಥಮ ಕಥಾಸಂಕಲನದಲ್ಲಿಯೇ ವೈವಿಧ್ಯಮಯವಾದ ವಸ್ತುಗಳನ್ನು ಅತ್ಯಂತ ಕೌಶಲ್ಯದಿಂದ ಸ್ವಾರಸ್ಯಪೂರ್ಣ ಕಥೆಗಳಾಗಿ ಹೆಣೆದಿದ್ದಾರೆ. ಸಮಾಜದ ಅಹಿತಕರ ಘಟನೆಗಳು ಬಹುವಾಗಿ ಕಾಡಿ ಏನೂ ಮಾಡಲಾಗದ ಅಸಹಾಯಕತೆಯಿಂದ ಎದೆ ಭಾರವಾಗಿಸಿದಾಗ ಅದನ್ನು ಹಗುರ ಮಾಡಿಕೊಳ್ಳುವ ಸಾಧನವಾಗಿ ಕಥಾ ಪ್ರಯೋಗ ಮಾಡಿದ್ದಾರೆ. ಶೋಷಣೆಯ ವಿವಿಧ ಮಗ್ಗಲುಗಳನ್ನು ನೈಜವಾಗಿ ಚಿತ್ರಿಸುವಲ್ಲಿ ಕಥೆಗಾರರು ಸಫಲರಾಗಿದ್ದಾರೆ" ಎಂದು ಯುವಬರಹಗಾರ ಪ್ರಶಸ್ತಿಯ ಆಯ್ಕೆ ಸಮಿತಿ ಸದಸ್ಯರಾದ ಡಾ. ಕೂಡ್ಲೂರು ವೆಂಕಟಪ್ಪ ಮತ್ತು ಡಾ. ಪ್ರಮೀಳಾ ಮಾಧವ್ ಅಭಿಪ್ರಾಯಪಟ್ಟಿದ್ದಾರೆ.

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೨೯-೦೯-೨೦೨೨

**ಸಂಸ್ಥಾಪಕರ ದಿನಾಚರಣೆ ಹಾಗೂ**
**ಶ್ರೀಮತಿ ಸಾವಿತ್ರಮ್ಮ-ಪ್ರೊ.ಎಂ.ವಿ.ಸೀ.ಸಾಹಿತ್ಯ ಪುರಸ್ಕಾರ**
**ಪುರಸ್ಕಾರ ಪ್ರದಾನ : ಶ್ರೀ ಗೊ.ರು. ಚನ್ನಬಸಪ್ಪ, ಜಾನಪದ ವಿದ್ವಾಂಸರು**
**ಪುರಸ್ಕೃತರು : ಪ್ರೊ. ಬಿ. ಜಯಪ್ರಕಾಶಗೌಡ ಅಧ್ಯಕ್ಷರು, ಕರ್ನಾಟಕ ಸಂಘ, ಮಂಡ್ಯ**



ಪ್ರೊ. ಸೌಮ್ಯ ಅವರ ನಾಡಗೀತೆ ಮತ್ತು ಪ್ರಾರ್ಥನಾಗೀತೆಯ ಗಾಯನದೊಂದಿಗೆ ಆರಂಭವಾದ ಕಾರ್ಯಕ್ರಮ ಗೌರವ ಕಾರ್ಯದರ್ಶಿ ಡಾ. ಶಾಂತರಾಜು ಅವರ ಸ್ವಾಗತದೊಡನೆ ಮುಂದುವರಿಯಿತು. ಪ್ರಶಸ್ತಿ ಪುರಸ್ಕೃತರಾದ ಪ್ರೊ. ಜಯಪ್ರಕಾಶಗೌಡ ಅವರನ್ನು ಶ್ರೀ ಗೊ.ರು. ಚನ್ನಬಸಪ್ಪ ಅವರು ಸನ್ಮಾನಿಸಿದರು. (ಶ್ರೀ ಗೊ.ರು.ಚನ್ನಬಸಪ್ಪ ಅವರ ಭಾಷಣವನ್ನು ಪುಟ ೭ರಲ್ಲಿ ಮುದ್ರಿಸಲಾಗಿದೆ) ಅಭಿನಂದನಾ ನುಡಿಗಳನ್ನು ಆಡಿದ ಡಾ. ಎಸ್.ಎಲ್. ಮಂಜುನಾಥ್ ಅವರು ಜಯಪ್ರಕಾಶಗೌಡ ಅವರ ವ್ಯಕ್ತಿತ್ವದ ವಿವಿಧ ಆಯಾಮಗಳನ್ನು ಕಣ್ಮುಂದೆ ನಿಲ್ಲುವಂತೆ ಕಟ್ಟಿಕೊಟ್ಟರು. ಡಾ.ಪಿ.ವಿ.ನಾರಾಯಣ ಅವರು ಎಂ.ವಿ.ಸೀ ಮತ್ತು ಬಿ.ಎಂ.ಶ್ರೀ. ಪ್ರತಿಷ್ಠಾನದ ಬೆಳವಣಿಗೆ ಕುರಿತು ಮಾತನಾಡಿ, ಮಂಡ್ಯದಲ್ಲಿ ಕರ್ನಾಟಕ ಸಂಘ ಬೆಳೆಸಿದ ಜಯಪ್ರಕಾಶಗೌಡ. ಅವರ ಸಾಧನೆಯನ್ನು ವಿವರಿಸಿ, ಒಳ್ಳೆಯ ವ್ಯಕ್ತಿಗೆ ಗೌರವ ಸಂದಿದೆ ಎಂದು ಬಣ್ಣಿಸಿದರು. ಪುರಸ್ಕೃತರಾದ ಜಯಪ್ರಕಾಶಗೌಡ ಅವರು ತಮ್ಮ ಸಾಧನೆಯ ಹಿಂದಿನ ಮಹಾನುಭಾವರನ್ನು ಸ್ಮರಿಸುತ್ತಾ ತಮ್ಮ ವ್ಯಕ್ತಿತ್ವದ ರಚನೆಗೆ ಪೂರಕವಾಗಿ ನಿಂತ ಅಂಶಗಳನ್ನು ವಿವರಿಸಿ, ಪ್ರಶಸ್ತಿ ನೀಡಿದ ಸಂಸ್ಥೆಗೆ, ದತ್ತಿ ಸ್ಥಾಪಿಸಿದವರಿಗೆ, ಆಯ್ಕೆ ಸಮಿತಿಗೆ ಧನ್ಯವಾದಗಳನ್ನು ಸಲ್ಲಿಸಿದರು. 'ಈ ಪ್ರಶಸ್ತಿ ನನಗೆ ನೀಡಿದ ಗೌರವವಲ್ಲ, ಮಂಡ್ಯ ಜಿಲ್ಲೆಗೆ ಸಂದ ಗೌರವ' ಎಂದು ನುಡಿದರು.

ಡಾ. ಬೈರಮಂಗಲ ರಾಮೇಗೌಡ ಅವರು ಅಧ್ಯಕ್ಷತೆ ವಹಿಸಿ ಮಾತನಾಡುತ್ತ "ಬಿ.ಎಂ.ಶ್ರೀ ಪ್ರತಿಷ್ಠಾನದ ಸಂಸ್ಥಾಪಕರಾದ ಪ್ರೊ. ಎಂ.ವಿ.ಸೀತಾರಾಮಯ್ಯನರು ಸಾಹಿತಿ ಮತ್ತು ಸಂಶೋಧಕರಾಗಿದ್ದುದರ ಜೊತೆಗೆ ಸಾಂಸ್ಕೃತಿಕ ಸಂಘಟನೆಯ ಕೆಲಸವನ್ನು ಪ್ರೀತಿಯಿಂದ, ಉತ್ಸಾಹದಿಂದ ಮಾಡುತ್ತಿದ್ದುದರಿಂದ ಅವರ ಮಕ್ಕಳು ಮೂರು ವರ್ಷಕ್ಕೊಮ್ಮೆ ಆವರ್ತನಗೊಳ್ಳುವಂತೆ ಸಾಂಸ್ಕೃತಿಕ ಸಂಘಟನೆಯ ಕ್ಷೇತ್ರದಲ್ಲಿ ಅಗಾಧವಾದ ಕೆಲಸ ಮಾಡಿದವರಿಗೆ ಸಲ್ಲುವಂತೆ ಪ್ರಶಸ್ತಿಯನ್ನು ಸ್ಥಾಪಿಸಿದ್ದಾರೆ. ಅದು ಈ ಬಾರಿ ಮಂಡ್ಯದಲ್ಲಿರುವ ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದು, ದೈತ್ಯ ಎಂದೇ ಹೆಸರಿಸಬಹುದಾದಷ್ಟು ಕೆಲಸ ಮಾಡಿದರುವ ಪ್ರೊ. ಬಿ. ಜಯಪ್ರಕಾಶಗೌಡರಿಗೆ ಸಲ್ಲುತ್ತಿರುವುದು ನನಗೆ ಸಂತೋಷವುಂಟುಮಾಡಿದೆ. ಜಯಪ್ರಕಾಶಗೌಡರು ವೃತ್ತಿಯಿಂದ ಅಧ್ಯಾಪಕರಾಗಿದ್ದಾಗಲೇ ಬಿ. ಶಂಕರಗೌಡರ ಸಹವಾಸ ಮತ್ತು ಮಾರ್ಗದರ್ಶನದಿಂದಾಗಿ ಸಾಂಸ್ಕೃತಿಕ ಕ್ಷೇತ್ರದತ್ತ ಆಕರ್ಷಿತರಾದವರು. ರಂಗಭೂಮಿ ಸೇರಿದಂತೆ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಜಯಪ್ರಕಾಶಗೌಡರು ತೋರಿಸುತ್ತಿದ್ದ ಆಸಕ್ತಿ ಸ್ವತಃ ಶಂಕರಗೌಡರೇ 'ಈತ ಮುಂದೆ ನನ್ನ ವಾರುಸುದಾರನಾಗಬಹುದು' ಎಂದು ಭವಿಷ್ಯ ನುಡಿಯುವಂತಾಯಿತು ಮತ್ತು ಅದು ನಿಜವೂ ಆಯಿತು. ಮಂಡ್ಯ ಕರ್ನಾಟಕ ಸಂಘ ಈಗ ಸ್ವತಂತ್ರವಾದ, ವಿಸ್ತಾರವಾದ, ಸುಸಜ್ಜಿತವಾದ ಕಟ್ಟಡ, ಸಂಶೋಧನ ಕೇಂದ್ರ, ಗ್ರಂಥಾಲಯ, ರಂಗಮಂದಿರ, ನಾಟಕ ಪ್ರದರ್ಶನ, ಪ್ರಶಸ್ತಿ ಪುರಸ್ಕಾರ ಇತ್ಯಾದಿಗಳನ್ನು ಒಳಗೊಂಡಿದ್ದು ಮಂಡ್ಯ ನಗರವನ್ನು ಸಾಂಸ್ಕೃತಿಕ ಕೇಂದ್ರವಾಗಿ ರೂಪಿಸುವಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತಿದೆ. ಈ ಎಲ್ಲ ಕೀರ್ತಿ, ಗೌರವ ನಿಜವಾಗಿ ಸಲ್ಲಬೇಕಾಗಿರುವುದು ಪ್ರೊ. ಬಿ.ಜಯಪ್ರಕಾಶಗೌಡರಿಗೆ" ಎಂದು ಹೇಳಿದರು.

ಜೊತೆಗೆ ಪ್ರತಿಯೊಬ್ಬರ ಮಾತುಗಳನ್ನು ಉಲ್ಲೇಖಿಸಿ ಎಂ.ವಿ.ಸೀ. ಹಾಗೂ ಗೊ.ರು.ಚನ್ನಬಸಪ್ಪ ಅವರುಗಳ ವ್ಯಕ್ತಿತ್ವವನ್ನು ವಿಶ್ಲೇಷಿಸಿ, ಎಲ್ಲರ ಮಾತುಗಳ ಆಂತರ್ಯವನ್ನು ಬಗೆದು ಡಾ. ಬೈರಮಂಗಲ ರಾಮೇಗೌಡರು ಅಧ್ಯಕ್ಷ ನುಡಿಯನ್ನು ಆಡಿದರು. ಬಿ.ಆರ್. ರವೀಂದ್ರನಾಥ ಅವರ ನಿರ್ವಹಣೆ ಮತ್ತು ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ಹಸ್ತಪ್ರತಿ ಮತ್ತು ಗ್ರಂಥಾಲಯ ವಿಭಾಗ ವರದಿ

೨೦೨೨ರ ಸೆಪ್ಟಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಗ್ರಂಥಾಲಯವು ಒಟ್ಟು ೩೦ ಪುಸ್ತಕಗಳನ್ನು ಸ್ವೀಕರಿಸಿದೆ. ಅವುಗಳ ದಾಖಲೀಕರಣ ಮತ್ತು ವರ್ಗೀಕರಣ ಕಾರ್ಯಗಳು ಮುಗಿದಿವೆ.

೨೦೨೨ರ ಸೆಪ್ಟಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ 'ಕಾವ್ಯ ಮಂಜರಿ ಮತ್ತು ಕಾವ್ಯ ಕಲಾನಿಧಿ' ಮಾಲೆಯ ಪ್ರಾಚೀನ ಕಾವ್ಯಗಳ ಮತ್ತು ಇನ್ನಿತರ ಪುಸ್ತಕಗಳನ್ನು ಡಿಜಿಟಲೀಕರಣ ಮಾಡಲಾಗಿದೆ.

ಪ್ರತಿಷ್ಠಾನದ ಗ್ರಂಥಾಲಯದಲ್ಲಿರುವ 'ಪ್ರಚಾರೋಪನ್ಯಾಸ ಮಾಲೆ' ಪುಸ್ತಕಗಳೆಲ್ಲವನ್ನೂ ಡಿಜಿಟಲೀಕರಣ ಗೊಳಿಸಲಾಗಿದೆ.

ವ್ಯಕ್ತಿ ಪರಿಚಯ.

## ಡಾ. ಪ್ರಭಾಕರ್ ಬೆಲವಾಡಿ

ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ. ಪದವಿ ಪಡೆದು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ೩೬ ವರ್ಷಗಳ ಕಾಲ ಪ್ರಾಧ್ಯಾಪಕರಾಗಿ, ನಿರ್ದೇಶಕರಾಗಿ, ಮಾರ್ಗದರ್ಶಕರಾಗಿ ಮತ್ತು ಸಂಯೋಜಕರಾಗಿ ಸೇವೆ ಸಲ್ಲಿಸಿ, ನಿವೃತ್ತಿ ನಂತರ ಬೆಂಗಳೂರಿನಲ್ಲಿ ವಾಸಿಸುತ್ತಿರುವ ಡಾ. ಪ್ರಭಾಕರ್ ಬೆಲವಾಡಿ ಇವರದು ಬಹುಮುಖ ಪ್ರತಿಭೆ. ತಮ್ಮ ವಿಜ್ಞಾನ ಕ್ಷೇತ್ರದ ದಕ್ಷ ಪ್ರಾಧ್ಯಾಪಕ ವೃತ್ತಿಯೊಂದಿಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲೂ ಅಳಿಲು ಸೇವೆಯನ್ನು ಮಾಡುತ್ತಾ, ಬಿಡುವಿನ ವೇಳೆಯಲ್ಲಿ ಸಮಾಜ ಸೇವೆ ಮಾಡುವುದರಲ್ಲೂ ಆಸಕ್ತಿ. ಬೆಂಗಳೂರಿನ ಪ್ರತಿಷ್ಠಿತ ಬಬ್ಬೂರುಕಮ್ಮೆ ಸೇವಾ ಸಮಿತಿಯ ಉಪಾಧ್ಯಕ್ಷರಾಗಿದ್ದಾರೆ.

೧೮-೧೦೨೦೨೨

## ಶಂಬಾ ಜೋಶಿ ದತ್ತಿ ಕಾರ್ಯಕ್ರಮ

### ವಿಷಯ : ಶಂಬಾ ಜೋಶಿ – ಜೀವನ ಮತ್ತು ಸಾಧನೆ

### ಉಪನ್ಯಾಸಕರು : ಪ್ರೊ. ಆರ್. ವಸಂತಕುಮಾರ್ ಮುಖ್ಯಸ್ಥರು, ಕನ್ನಡ ವಿಭಾಗ, ಜೈನ್ ಕಾಲೇಜು



ಶಂ.ಬಾ. ಜೋಶಿ ದತ್ತಿ ಕಾರ್ಯಕ್ರಮದಲ್ಲಿ ಪ್ರೊ. ಆರ್. ವಸಂತಕುಮಾರ್ ಅವರು ಶಂ.ಬಾ.ಜೋಶಿ ಅವರ ಜೀವನ ಮತ್ತು ಸಾಧನೆಯನ್ನು ಕುರಿತು ಉಪನ್ಯಾಸ ನೀಡಿದರು. "ಶಂ.ಬಾ. ಜೋಶಿಯವರ ಮನೆಮಾತು ಮರಾಠಿಯಾದರೂ ಸಹ ಬೇಂದ್ರೆ ಅವರಂತೆ ಕನ್ನಡಕ್ಕಾಗಿಯೇ ದುಡಿದವರು. ಕನ್ನಡ ಸಾಹಿತ್ಯ ಮತ್ತು ವಿವಿಧ ಶಿಸ್ತುಗಳ ನಡುವೆ ಅಂತರ್ ಸಂಬಂಧವನ್ನು ಬೆಸೆದು ವಿಶಿಷ್ಟವಾಗಿ ಅಧ್ಯಯನ, ಸಂಶೋಧನೆ ಮಾಡಿರುವ ಶಂ.ಬಾ.ಜೋಶಿಯವರು ಪುರಾಣಕಾವ್ಯಗಳನ್ನು ಕುರಿತು ಹೊಸನೋಟವನ್ನು ಬೀರಿದವರು. ವ್ಯಾಸ–ಪಂಪ– ಕುಮಾರವ್ಯಾಸ ಭಾರತಗಳಲ್ಲಿ ಚಿತ್ರಿತವಾಗಿರುವ ಕರ್ಣನ ಪಾತ್ರವನ್ನು ಕುರಿತು ತಮ್ಮ ಗಟ್ಟಿಯಾದ ನಿಲುವನ್ನು ಅಭಿವ್ಯಕ್ತಿಪಡಿಸುವುದರ ಮೂಲಕ ಯಾವುದೇ ಕವಿಯನ್ನು ಆತನ ಸ್ಥಾನಮಾನದ ಮೂಲಕ ಗಮನಿಸದೆ, ಆತನ ಕೃತಿಯನ್ನು ವಸ್ತುನಿಷ್ಠವಾಗಿ ನೋಡಬೇಕು, ಪೂರ್ವಗ್ರಹಪೀಡಿತ ಧೋರಣೆ ಒಳ್ಳೆಯದಲ್ಲ ಎಂಬುದನ್ನು ತೋರಿಸಿಕೊಟ್ಟ ಅಗ್ರಮಾನ್ಯ ವಿಮರ್ಶಕರು, ಸಂಶೋಧಕರು. ಜೋಶಿ ಅವರು ಬಾಲಗಂಗಾಧರನಾಥ ತಿಲಕರ ಪ್ರಭಾವಕ್ಕೆ ಒಳಗಾಗಿ ಆ ನಿಟ್ಟಿನಲ್ಲಿ ಸಾಗಿದರು. ಅವರ ಜೀವನ ಚರಿತ್ರೆಯನ್ನು ರಚಿಸಿ ಅಂಥ ಮಹನೀಯರ ಜೀವನ ಚರಿತ್ರೆ ಹೇಗಿರಬೇಕೆಂಬುದನ್ನು ತೋರಿಸಿಕೊಟ್ಟರು. ಆರಂಭದಲ್ಲಿ ಭಾಷೆ, ಸ್ಥಳನಾಮ, ಪುರಾಣ ಹೀಗೆ ಅನೇಕ ವಿಷಯಗಳ ಮೇಲೆ ಸಂಶೋಧನೆ ಮಾಡಿ ಬದುಕಿನುದ್ದಕ್ಕೂ ಕನ್ನಡ ಪರವಾದ ಒಲವನ್ನು ಕಣ್ಮುಂದೆ ನಡೆದಂತೆ ಕಟ್ಟಿಕೊಟ್ಟರು" ಎಂದು ಹೇಳಿದರು. ಪ್ರಾಸ್ತಾವಿಕವಾಗಿ ಮಾತನಾಡಿದ ಡಾ. ಬೈರಮಂಗಲ ರಾಮೇಗೌಡರು ಶಂ.ಬಾ. ಜೋಶಿಯವರ ಸಾಹಿತ್ಯ, ಬೇಂದ್ರೆ ಮತ್ತು ಶಂ.ಬಾ. ಅವರ ನಡುವೆ ಇದ್ದ ತಾತ್ವಿಕ ಭಿನ್ನಾಭಿಪ್ರಾಯಗಳನ್ನು ವಿವರಿಸಿ, ಅವರ ಸಾಹಿತ್ಯದ ಬಹುಮುಖತೆಯನ್ನು ಪರಿಚಯಿಸಿದರು. ಶ್ರೀ ಬಿ.ಎಸ್. ಗುರುಪ್ರಸಾದ್ ಅವರು "ಶಂ.ಬಾ. ವಿಚಾರ ವೇದಿಕೆ ೧೯೯೮ರಲ್ಲಿ ಸ್ಥಾಪಿಸಿದ ಈ ದತ್ತಿಯಿಂದ ನಡೆಯುತ್ತಿರುವ ೨೩ನೇ ಕಾರ್ಯಕ್ರಮ ಇದಾಗಿದೆ. ೪೫ ವರ್ಷಗಳ ದೀರ್ಘಕಾಲ ಕನ್ನಡದ ಸೇವೆ ಸಲ್ಲಿಸಿದ ಶಂ.ಬಾ.ಜೋಶಿಯವರ ನೆನಪಿಗಾಗಿ ಸ್ಥಾಪಿಸಿದ ಈ ದತ್ತಿ ನಿಧಿಗೆ ಮಾನವಧರ್ಮ ಪ್ರತಿಷ್ಠಾನ ನೆರವು ನೀಡಿದೆ" ಎಂದು ತಿಳಿಸಿ ಕಾರ್ಯಕ್ರಮವನ್ನು ನಿರ್ವಹಿಸಿದರು. ಡಾ. ಪ್ರಭಾಕರ ಬೆಲವಾಡಿ ಅವರ ಸ್ವಾಗತ ಮತ್ತು ಪರಿಚಯದೊಡನೆ ಆರಂಭವಾದ ಈ ಕಾರ್ಯಕ್ರಮದಲ್ಲಿ ಡಾ. ಶಾಂತರಾಜು ಅವರು ವಿಶೇಷ ಉಪನ್ಯಾಸವನ್ನು ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ಸರ್ವರಿಗೂ ವಂದನೆಗಳನ್ನು ಸಮರ್ಪಿಸುವ ಮೂಲಕ ಕಾರ್ಯಕ್ರಮ ಮುಕ್ತಾಯವಾಯಿತು.

**ಜೀವನ ವಿವರ** — **ಡಾ. ಪಿ. ವಿ. ನಾರಾಯಣ**

ಪೂರ್ಣ ಹೆಸರು : ಪ್ರಧಾನ್ ವೆಂಕಪ್ಪಯ್ಯ ನಾರಾಯಣ,

ಹುಟ್ಟಿದ ದಿನಾಂಕ : 18 – 12 – 1942

ವಿದ್ಯಾರ್ಹತೆ : ಎಂ.ಎ. (ಕನ್ನಡ) – 1964, ಮೈಸೂರು ವಿಶ್ವವಿದ್ಯಾನಿಲಯ

ಎಂ.ಎ. (ಇಂಗ್ಲಿಷ್) – 1967, ಕರ್ನಾಟಕ ವಿಶ್ವವಿದ್ಯಾಲಯ, ಪಿಎಚ್. ಡಿ. (ಕನ್ನಡ) –1975 ಬೆಂಗಳೂರು ವಿಶ್ವವಿದ್ಯಾಲಯ

ಶಿಕ್ಷಣಾನುಭವ: ರೂರಲ್ ಇನ್ಸ್‌ಟಿಟ್ಯೂಟ್, ಹನುಮನಮಟ್ಟಿ, ವಿದ್ಯೋದಯ ಹೈಸ್ಕೂಲು, ತಿ. ನರಸೀಪುರ, ಪ್ರಥಮ ದರ್ಜೆ ಕಾಲೇಜು, ಆದೋನಿ ಡಿ. ಬನುಮಯ್ಯ ಕಾಲೇಜು, ಮೈಸೂರು, ಪ್ರಥಮ ದರ್ಜೆ ಕಾಲೇಜು, ತೀರ್ಥಹಳ್ಳಿ ಇವುಗಳಲ್ಲಿ ಅಲ್ಪಕಾಲದ ಸೇವೆ;

17 –08 –1968 ರಿಂದ 31 –12– 2000 ದವರೆಗೆ ಬೆಂಗಳೂರಿನ ಬಸವನಗುಡಿಯ ವಿಜಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ, ರೀಡರ್ ಮತ್ತು ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತಿ:

ಬೆಂಗಳೂರು ವಿಶ್ವವಿದ್ಯಾಲಯ ಸಂಜೆಯ ತರಗತಿಗಳಲ್ಲಿ, ಶೇಷಾದ್ರಿಪುರಂ ಕಾಲೇಜಿನಲ್ಲಿ ಹಾಗೂ ಎಂ.ಇ.ಎಸ್. ಕಾಲೇಜುಗಳಲ್ಲಿ ಕನ್ನಡ ಎಂ.ಎ. ತರಗತಿಗಳಿಗೆ ಕಾಲ ಬೋಧನೆ; ಒಂಬತ್ತು ಮಂದಿ ಪಿಎಚ್.ಡಿ. ಅಭ್ಯರ್ಥಿಗಳಿಗೆ ಯಶಸ್ವೀ ಮಾರ್ಗದರ್ಶನ.

ಶೈಕ್ಷಣಿಕ ಚಟುವಟಿಕೆ :ವಿವಿಧ ಸಾಹಿತ್ಯಸಂಬಂಧೀ ವಿಚಾರ ಸಂಕಿರಣಗಳಲ್ಲಿ ಹಾಗೂ ಗೋಷ್ಠಿಗಳಲ್ಲಿ ವಿಚಾರ ಮಂಡನೆ; ಕೆಲವು ವಿಶ್ವವಿದ್ಯಾಲಯಗಳಲ್ಲಿ ವಿಶೇಷೋಪನ್ಯಾಸ

ಸಾಮಾಜಿಕ ಚಟುವಟಿಕೆ : ಸಾಹಿತಿಗಳ ಕಲಾವಿದರ ಬಳಗದ ಪ್ರಧಾನ ಸಂಚಾಲಕ, ಪ್ರಧಾನ ಕಾರ್ಯದರ್ಶಿ, ಕನ್ನಡ ಶಕ್ತಿ ಕೇಂದ್ರ, ಮಾಜಿ ಅಧ್ಯಕ್ಷ, ಬಿ.ಎಂ.ಶ್ರೀ. ಪ್ರತಿಷ್ಠಾನ

ಪ್ರಕಟಣೆಗಳು

20 ವಿಮರ್ಶೆ ಮತ್ತು ಸಂಶೋಧನೆ, 12 ಸಂಪಾದಿತ ಕೃತಿಗಳು, ಪ್ರವಾಸ ಸಾಹಿತ್ಯ, 18 ಅನುವಾದಗಳು, 5 ನಿಘಂಟು, 9 ಕಾದಂಬರಿಗಳು

ಇವಲ್ಲದೆ, ಅನೇಕ ಪತ್ರಿಕೆಗಳಲ್ಲಿ ಲೇಖನಗಳು, ಸಣ್ಣ ಕತೆಗಳು; ಅಭಿನಂದನ ಗ್ರಂಥಗಳಲ್ಲಿ ಸಂಶೋಧನ ಲೇಖನಗಳು ಮತ್ತು ಇಂಗ್ಲಿಷ್‌ನಲ್ಲಿ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಕುರಿತ ಲೇಖನಗಳು ಪ್ರಕಟವಾಗಿವೆ. ಇತರರೊಡನೆ ಸೇರಿ ಮಾಡಿದ ಸಹಕರ್ತೃತ್ವದ ಕೆಲವು ಪುಸ್ತಕಗಳು. 'ಧರ್ಮಕಾರಣ' ಕಾದಂಬರಿಯನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿಯು ವರ್ಷದ ಶ್ರೇಷ್ಠ ಕಾದಂಬರಿಯೆಂದು ಪುರಸ್ಕಾರವನ್ನು ಘೋಷಿಸಿದಾಗ ಸಾಹಿತ್ಯೇತರ ಕಾರಣಕ್ಕಾಗಿ ಭಾರಿ ವಿವಾದವೆದ್ದು, ಒತ್ತಡಕ್ಕೆ ಮಣಿದ ಕರ್ನಾಟಕ ಸರ್ಕಾರ ಅದನ್ನು ಮುಟ್ಟುಗೋಲು ಹಾಕಿಕೊಳ್ಳುವ ಆಜ್ಞೆಯನ್ನು ಜಾರಿಮಾಡಿತು. ಈ ತೀರ್ಮಾನದ ವಿರುದ್ಧ ಕೆಲವು ಮಂದಿ ಕನ್ನಡ ಲೇಖಕರು, ಮತ್ತು ಕೊನೆಯ ಅಪೀಲುದಾರನಾಗಿ ಕಾದಂಬರಿಯ ಲೇಖಕನೂ, ಕರ್ನಾಟಕ ಹೈಕೋರ್ಟಿನಲ್ಲಿ ದಾವೆ ಹೂಡಿದರು; ಕೆಲವರು ಆಕ್ಷೇಪ ಮಾಡಿದ ಭಾಗಗಳನ್ನು ಕೈಬಿಟ್ಟರೆ ಮುಟ್ಟುಗೋಲು ಆಜ್ಞೆಯನ್ನು ವಾಪಸು ಪಡೆಯುವುದಾಗಿ ಸರ್ಕಾರ ಹೇಳಿದಾಗ ಕೋರ್ಟು ಲೇಖಕನ ಅಭಿಪ್ರಾಯ ಕೇಳಿತು; ಆದರೆ ಲೇಖಕ ಇದಕ್ಕೆ ಒಪ್ಪಲಿಲ್ಲವಾಗಿ, ಕೊನೆಗೆ ಕೋರ್ಟು, ಕಾದಂಬರಿಯು ಕೆಲವರ ಮನಸ್ಸಿಗೆ ನೋವುಂಟುಮಾಡಿರುವುದರಿಂದ ಅದನ್ನು ಲೇಖಕನು ದುರುದ್ದೇಶದಿಂದ ರಚಿಸಿದರೆಂಬ ತೀರ್ಮಾನಕ್ಕೆ ಬರಬೇಕಾಗಿದೆಯೆಂದು ಹೇಳಿ ಸರ್ಕಾರದ ಮುಟ್ಟುಗೋಲು ಆಜ್ಞೆಯನ್ನು ಎತ್ತಿ ಹಿಡಿಯಿತು. ಹೈಕೋರ್ಟಿನಲ್ಲಿ ದಾವೆ ಹೂಡಿದ್ದ ಲೇಖಕರಲ್ಲಿ ಬಹುಮಂದಿ ಹಾಗೂ ಪ್ರಸ್ತುತ ಲೇಖಕ ಹೈಕೋರ್ಟು ತೀರ್ಪಿನ ವಿರುದ್ಧ ಭಾರತದ ಸುಪ್ರೀಂ ಕೋರ್ಟಿನಲ್ಲಿ ಅಪೀಲು ಮಾಡಿದ್ದರು. ಅದು ಸಹ ಕೆಲವು ಮಂದಿ ಅಲ್ಪಸಂಖ್ಯಾತರ ಧಾರ್ಮಿಕ ಮನೋಭಾವಕ್ಕೆ ಧಕ್ಕೆ ತರುವ ಕಾರಣವನ್ನು ಒಪ್ಪಿ ಕರ್ನಾಟಕ ಸರ್ಕಾರವು 'ಧರ್ಮಕಾರಣ' ಕೃತಿಗೆ ನಿಷೇಧ ಹೇರುವ 1997 ನೇ ಇಸವಿಯ ಆಜ್ಞೆಯನ್ನು 2010 ರಲ್ಲಿ ಎತ್ತಿಹಿಡಿದಿದೆ.

೧೪-೧೦-೨೦೨೨

## ಎಂ.ಎ. ರಾಮಾನುಜ ಅಯ್ಯಂಗಾರ್ ದತ್ತಿ ಕಾರ್ಯಕ್ರಮ

### ವಿಷಯ : ಕೆ.ಜಿ. ಕುಂದಣಗಾರರ ಬದುಕು–ಸಾಧನೆ'

**ಉಪನ್ಯಾಸಕರು : ಪ್ರೊ. ಚಂದ್ರಶೇಖರ್**

**ನಿವೃತ್ತ ಪ್ರಾಂಶುಪಾಲರು, ವಿಜಯ ಪದವಿಪೂರ್ವ ಕಾಲೇಜು**



ಎಂ.ಎ. ರಾಮಾನುಜ ಅಯ್ಯಂಗಾರ್ ಅವರ ಅಣ್ಣನ ಮೊಮ್ಮಗಳ ಮಗ ಎಂ.ಎ. ವೆಂಕಟೇಶ ಸ್ಥಾಪಿಸಿದ ಈ ದತ್ತಿಯಲ್ಲಿ ಪ್ರತಿವರ್ಷ ಉಪನ್ಯಾಸ ಕಾರ್ಯಕ್ರಮವನ್ನು ನಡೆಸಲು ಕೋರಿಕೆ ಸಲ್ಲಿಸಿದ್ದಾರೆ. ಅದರಂತೆ ವಿಜಯ ಪದವಿ ಪೂರ್ವ ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ಪ್ರೊ. ಚಂದ್ರಶೇಖರ್ ಅವರು ಸಂಶೋಧಕರಾದ ಪ್ರೊ. ಕೆ.ಜಿ. ಕುಂದಣಗಾರರ ಜೀವನ–ಸಾಧನೆ ಕುರಿತಂತೆ ಉಪನ್ಯಾಸ ನೀಡಿದರು. "ಕಷ್ಟದ ಕಾಲದಲ್ಲಿ ಆಸಕ್ತಿಯಿಂದ ವಿದ್ಯಾಭ್ಯಾಸ ಮಾಡಿ, ಶಿಕ್ಷಕರಾಗಿ, ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಕುಂದಣಗಾರರು ಸಂಶೋಧನಾ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅನನ್ಯವಾದುದು. ಸಂಶೋಧನೆಯ ನೆಲೆಗಟ್ಟನ್ನು ರೂಪಿಸಿಕೊಟ್ಟ ಇವರು ಸಂಸ್ಕೃತ, ಜೈನ ಸಾಹಿತ್ಯ ಮತ್ತು ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡಿ ಕರ್ನಾಟಕ ಕಾಲೇಜಿನ ಮೊಟ್ಟಮೊದಲ ಕನ್ನಡ ಪ್ರಾಧ್ಯಾಪಕರಾಗಿ ಎರಡು ವರ್ಷ ಕಾರ್ಯನಿರ್ವಹಿಸಿದರು. ಆದರೆ ಕನ್ನಡ ಸ್ನಾತಕೋತ್ತರ ಪದವೀಧರರಲ್ಲದ ಕಾರಣಕ್ಕೆ ಅಲ್ಲಿಂದ ತೆಗೆಯಲಾಗುತ್ತದೆ. ಮುಂದೆ ಕೊಲ್ಲಾಪುರದ ರಾಜರಾಮ್ ಕಾಲೇಜಿನ ಪ್ರಾಚ್ಯ ಸಂಶೋಧನ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಾರೆ. ಅಲ್ಲಿ ಶಾಸನ ಸಾಹಿತ್ಯದ ಬಗೆಗೆ ಒಲವು ಮೂಡಿ ಸಂಶೋಧನೆಯಲ್ಲಿ ತೊಡಗಿಸಿಕೊಳ್ಳುತ್ತಾರೆ. Notes on Mahalakshmi temple in Kollapura ಕೃತಿ ರಚನೆ ಮಾಡಿ ಇದು ಶೈವ ಪರಂಪರೆಯ ದೇವಾಲಯವೆಂಬುದಕ್ಕೆ ಉಲ್ಲೇಖಗಳನ್ನು ನೀಡುತ್ತಾರೆ. ಕೊಲ್ಲಾಪುರದ ಸುತ್ತಮುತ್ತಲಿನ ಶಾಸನಗಳನ್ನು ಸಂಗ್ರಹಿಸುವ ಮೂಲಕ ಇತಿಹಾಸ ಪುನಾರಚನೆಗೆ ಅವಕಾಶ ಕಲ್ಪಿಸುತ್ತಾರೆ. ಕುಂದಣಗಾರರು ಜೈನ ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ನೋಡಿ ಇವರು ಜೈನರೇ ಇರಬೇಕೆಂದು ಅನೇಕರು ಭಾವಿಸಿದ್ದರು. ಅದಿಪುರಾಣ ಸಂಗ್ರಹ, ಕುಮುದೇಂದು ರಾಮಾಯಣದಂತಹ ಗ್ರಂಥಗಳಲ್ಲದೆ, ಹಲವು ಲೇಖನಗಳು ಪ್ರಕಟವಾಗಿವೆ. ಆ ಮೂಲಕ ಈ ಮಹಾ ಸಂಶೋಧಕರ ಸಾಧನೆಯನ್ನು ನೋಡಬಹುದು" ಎಂದು ವಿವರವಾಗಿ ಪರಿಚಯ ಮಾಡಿಕೊಟ್ಟರು.

ಶ್ರೀ ಬಿ.ಎಸ್. ಗುರುಪ್ರಸಾದ್ ದತ್ತಿ ಸ್ಥಾಪಕರು ಮತ್ತು ಎಂ.ಎ. ರಾಮಾನುಜ ಅಯ್ಯಂಗಾರ್ ಅವರನ್ನು ಸಭೆಗೆ ಪರಿಚಯ ಮಾಡಿಕೊಟ್ಟರು. ಡಾ. ಶಾಂತರಾಜು ಗಣ್ಯರನ್ನೂ ಸಭಿಕರನ್ನೂ ಸ್ವಾಗತಿಸಿ ಉಪನ್ಯಾಸಕ್ಕೆ ಅನುವು ಮಾಡಿಕೊಟ್ಟರು. ಡಾ. ಬೈರಮಂಗಲ ರಾಮೇಗೌಡ ಅವರು ಪ್ರಾಸ್ತಾವಿಕ ಮಾತುಗಳನ್ನಾಡಿ "ಕುಂದಣಗಾರರು ಉತ್ತರ ಕರ್ನಾಟಕದ ಮೊದಲ ಕನ್ನಡ ಎಂ.ಎ. ಪದವೀಧರ, ಮೊದಲ ಕನ್ನಡ ಪ್ರಾಧ್ಯಾಪಕ, ಮೊದಲ ಕನ್ನಡ ಪಿಎಚ್.ಡಿ. ಪದವಿಗಳ ಮಾರ್ಗದರ್ಶಕರು. ಕರ್ನಾಟಕ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ ಐತಿಹಾಸಿಕ ದಾಖಲೆಗಳಾದ ಶಿಲಾಶಾಸನ, ತಾಮ್ರಪಟ, ತಾಳೆಗರಿ, ಕಡತ ಮೊದಲಾದವುಗಳನ್ನು ಸಂಗ್ರಹಿಸಿ ಪ್ರಾಚ್ಯವಸ್ತುಗಳ ವ್ಯಾಸಂಗವನ್ನು ಪ್ರಚುರಗೊಳಿಸಿದರು. ದ.ರಾ.ಬೇಂದ್ರೆ, ವಿ.ಕೃ ಗೋಕಾಕ್, ರಂ.ಶ್ರೀ. ಮುಗಳಿ, ಎಂ.ಎಸ್. ಸುಂಕಾಪುರ, ಸ.ಸ. ಮಾಳವಾಡ, ಎಸ್.ಎಸ್. ಭೂಸನೂರಮಠ, ಬಿ.ಡಿ.ಜತ್ತಿ ಮುಂತಾದವರನ್ನು ಶಿಷ್ಯರಾಗಿ ಪಡೆದಿದ್ದ ಮಹಾಗುರುಗಳು" ಎಂದು ಹೇಳಿದರು. ಡಾ. ಪ್ರಭಾಕರ್ ಬೆಲವಾಡಿ ಅವರ ವಂದನಾರ್ಪಣೆಯೊಂದಿಗೆ ಉಪನ್ಯಾಸ ಕಾರ್ಯಕ್ರಮ ಮುಕ್ತಾಯಗೊಂಡಿತು.

**ವ್ಯಕ್ತಿ ಪರಿಚಯ**

## ಡಾ. ಎಸ್. ಅನಿಲ್‌ಕುಮಾರ್

ವೃತ್ತಿಯಲ್ಲಿ ವಾಣಿಜ್ಯ ಉಪನ್ಯಾಸಕರಾದರೂ ಪ್ರವೃತ್ತಿಯಾಗಿ ಶಾಲಾ ವಿದ್ಯಾಭ್ಯಾಸದಿಂದಲೇ 'ರಾಮಕೃಷ್ಣ ಮಠ' ಹಾಗೂ 'ಉದಯಭಾನು ಕಲಾಸಂಘದಲ್ಲಿ' ಕಾರ್ಯಕರ್ತರಾಗಿ ಕಾರ್ಯನಿರ್ವಹಿಸುತ್ತಿದ್ದರು. ವಾಣಿಜ್ಯ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಪಡೆದ ನಂತರ ಉಪನ್ಯಾಸಕ ವೃತ್ತಿ ಆರಂಭಿಸಿದರು. ವಿಜಯ ಕಾಲೇಜಿನಲ್ಲಿ ಒಂದೂವರೆ ದಶಕಗಳ ಕಾಲ ಅಧ್ಯಾಪಕ ವೃತ್ತಿಯಲ್ಲಿ ದುಡಿದು, ಸಿಂಧಿ ಸಂಜೆ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ, ನಂತರ ಎ.ಪಿ.ಎಸ್. ಕಾಲೇಜಿನಲ್ಲಿ, ಪ್ರಸ್ತುತ ಎಸ್.ಆರ್.ಎನ್. ಆದರ್ಶ ಸಂಜೆ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದಾರೆ.

ವಾಣಿಜ್ಯ ಪಠ್ಯ ವಿಷಯಕ್ಕೆ ಸಂಬಂಧಿಸಿದ ಹಲವು ಪುಸ್ತಕಗಳ ಲೇಖಕರಾಗಿದ್ದು, ಮಹಾಭಾರತದ ದ್ರೋಣಾಚಾರ್ಯರ ಸಂಪೂರ್ಣ ಜೀವನ ಚರಿತ್ರೆಯನ್ನು ಪುಸ್ತಕ ರೂಪದಲ್ಲಿ ತಂದು ಸಾಹಿತ್ಯಲೋಕಕ್ಕೆ ಅರ್ಪಿಸಿದ್ದಾರೆ. ಅಲ್ಲದೆ ಉದಯಭಾನು ಕಲಾಸಂಘವು 2015ರಲ್ಲಿ ಪ್ರಕಟಿಸಿರುವ 'ಬೆಂಗಳೂರು ದರ್ಶನ' ಬೃಹತ್ ಗ್ರಂಥಕ್ಕೆ 'ಜಾಹೀರಾತು' ಕುರಿತು ಲೇಖನವನ್ನು ಬರೆದಿದ್ದಾರೆ. ಬರವಣಿಗೆಯಲ್ಲಿ ಹೆಚ್ಚು ಆಸಕ್ತಿ ಹೊಂದಿರುವ ಶ್ರೀಯುತರ ಎರಡು ಪುಸ್ತಕಗಳು ಅಚ್ಚಿನಲ್ಲಿವೆ.

ಪ್ರತಿಷ್ಠಿತ ಉದಯಭಾನು ಕಲಾಸಂಘದಲ್ಲಿ ಜಂಟಿ ಕಾರ್ಯದರ್ಶಿಯಾಗಿರುವ ಇವರು ಬೆಂಗಳೂರು ನಗರ ವಿಶ್ವವಿದ್ಯಾನಿಲಯ ವಾಣಿಜ್ಯ ಉಪನ್ಯಾಸಕರ ಒಕ್ಕೂಟಕ್ಕೆ ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ನೀಡುವ 'ಕೆಂಪೇಗೌಡ ಪ್ರಶಸ್ತಿ', ಉದಯಭಾನು ಕಲಾ ಸಂಘದ ಉಚಿತ ಉಪನ್ಯಾಸ ತರಗತಿಗಳ ಗೌರವ ಅಧ್ಯಾಪಕರಿಗೆ ನೀಡುವ 'ಸುವರ್ಣ ಉದಯಭಾನು ವಿದ್ಯಾರತ್ನ' ಪ್ರಶಸ್ತಿಯೊಂದಿಗೆ ಹಲವು ಸಂಘ–ಸಂಸ್ಥೆ, ಶಾಲೆ–ಕಾಲೇಜು ಶಿಕ್ಷಣ ಸಂಸ್ಥೆಗಳು ಸನ್ಮಾನ–ಅಭಿನಂದನೆಗಳನ್ನು ಮಾಡಿ ಗೌರವಿಸಿವೆ.

ಇವರು ನೀಡಿರುವ ಸೇವೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನವು ಧನ್ಯವಾದಗಳನ್ನು ಅರ್ಪಿಸುತ್ತದೆ.

## ದಿನಾಂಕ 29-09-2022 ರಂದು ನಡೆದ ಸಾವಿತ್ರಮ್ಮ ಪ್ರೊ. ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿದ್ದ ಶ್ರೀ ಗೊ.ರು. ಚನ್ನಬಸಪ್ಪ ಅವರ ಭಾಷಣ

### ಭಾಗ-1

ಹನ್ನೆರಡನೆಯ ಶತಮಾನದ ವಚನಕಾರ ಅಂಬಿಗರ ಚೌಡಯ್ಯನ ಒಂದು ವಚನವಿದೆ: 'ಆರಿಕೆ ಬಿತ್ತಿದ ಗಿಡುವಿನ ಹೂವ ಕೊಯಿದು, ಊರೆಲ್ಲರೂ ಕಟ್ಟಿಸಿದ ಕೆರೆಯ ನೀರ ತಂದು, ನಾಡೆಲ್ಲರೂ ನೋಡಿ ಎಂದು ಪೂಜಿಸಿದ ಪುಣ್ಯ ಹೂವಿಗೋ, ನೀರಿಗೋ, ನಾಡೆಲ್ಲಕ್ಕೋ, ಪೂಜಿಸಿದಾತಗೋ ಇದ ನಾನರಿಯೆ, ಹೇಳೆಂದನಂಬಿಗ ಚೌಡಯ್ಯ'.

ಯಾರೋ ನೆಟ್ಟು ಬೆಳೆಸಿದ ಗಿಡದ ಹೂವು, ಊರೆಲ್ಲ ಸೇರಿ ಕಟ್ಟಿಸಿದ ಕೆರೆಯ ನೀರು, ಇವನ್ನು ತಂದು ನಾಡವರೆಲ್ಲ ನೋಡಿ ಎಂದು ಪೂಜಿಸುತ್ತಿದ್ದೇನೆ. ಈ ಪೂಜೆಯ ಪುಣ್ಯ ಹೂವಿಗೋ, ನೀರಿಗೋ, ಊರೆಲ್ಲರಿಗೋ, ಪೂಜಿಸಿದಾತನಿಗೋ? ಇದು ನನಗೆ ತಿಳಿಯದಾಗಿದೆ, ನೀನೇ ಹೇಳಬೇಕು ಎಂದು ತನಗೆ ತಾನೇ ಕೇಳಿಕೊಳ್ಳುತ್ತಾನೆ ಆ ವಚನಕಾರ.

ಈಗಲೂ ಅಂತಹುದೇ ಸಂದರ್ಭ. ಇಂದು ಇಲ್ಲಿ ಪ್ರದಾನವಾಗಿರುವ ಪ್ರಶಸ್ತಿ ಸಾವಿತ್ರಮ್ಮ ಎಂ.ವಿ.ಸೀ. ಅವರ ಹೆಸರಿನದು. ಪ್ರಶಸ್ತಿ ಪುರಸ್ಕಾರ ನಡೆಯುತ್ತಿರುವುದು ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ. ಪ್ರಶಸ್ತಿಯ ಪುರಸ್ಕೃತರು ಮಂಡ್ಯದ ಪ್ರೊ. ಜಯಪ್ರಕಾಶಗೌಡರು. ಪ್ರಶಸ್ತಿಯ ಪ್ರಾಯೋಜಕರು ದಿ. ಎಂ.ವಿ.ಸೀ. ಅವರ ಪ್ರೀತಿಯ ಮಕ್ಕಳು. ಪ್ರಶಸ್ತಿ ಪ್ರದಾನ ನನ್ನಿಂದ. ನೀವೆಲ್ಲ ಅದಕ್ಕೆ ಸಾಕ್ಷಿ. ಹಾಗಾದರೆ, ಈ ಪ್ರಶಸ್ತಿ ಪುರಸ್ಕಾರ ಪೂಜೆಯ ಪುಣ್ಯ ಯಾರಿಗೆ? ವಚನಕಾರ 'ನನಗೆ ತಿಳಿಯದು' ಎಂದಿರುವ ಸಂದಿಗ್ಧತೆಯೇನೂ ಇಲ್ಲಿಲ್ಲ. ಅದು ನನಗೆ ತಿಳಿದಿದೆ. ನಿಮಗೂ ತಿಳಿದಿದೆ. ಈ ಪ್ರಶಸ್ತಿಯ ಪುಣ್ಯ ದಿವಂಗತ ಪ್ರೊ. ಎಂ.ವಿ.ಸೀತಾರಾಮಯ್ಯ ದಂಪತಿಗೆ!

ಇಂದಿಗೆ ಎರಡು ವಾರಗಳ ಹಿಂದೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರಾದ ಬೈರಮಂಗಲ ರಾಮೇಗೌಡರು ಮತ್ತು ಕಾರ್ಯದರ್ಶಿಗಳಾದ ಡಾ. ಶಾಂತರಾಜು ಅವರು ನನ್ನಲ್ಲಿಗೆ ಬಂದು, ಈ ಪುರಸ್ಕಾರ ಸಮಾರಂಭವನ್ನು ಕುರಿತು ಪ್ರಸ್ತಾಪಿಸಿ, ದಿವಂಗತ ಎಂ.ವಿ.ಸೀ. ಅವರ ಮಕ್ಕಳು ತಾಯಿತಂದೆಯರ ಹೆಸರಿನಲ್ಲಿ ಸ್ಥಾಪಿಸಿರುವ ಸಾಹಿತ್ಯ ಪುರಸ್ಕಾರವನ್ನು ಒಂದೊಂದು ವರ್ಷ ಒಂದೊಂದು ಕ್ಷೇತ್ರದ ಸಾಧಕರಿಗೆ ನೀಡಲಾಗುತ್ತಿದೆಯೆಂದೂ, ಈ ಸಲದ ಪುರಸ್ಕಾರಕ್ಕೆ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘಟನೆಯಲ್ಲಿ ಹೆಸರಾಗಿರುವ ಮಂಡ್ಯದ ಪ್ರೊ. ಬಿ. ಜಯಪ್ರಕಾಶಗೌಡ ಅವರನ್ನು ಆರಿಸಲಾಗಿದೆಯೆಂದೂ ಈ ಪುರಸ್ಕಾರ ಪ್ರದಾನ ಸಮಾರಂಭಕ್ಕೆ ಬರಬೇಕೆಂದೂ ಅಪೇಕ್ಷಿಸಿದರು. ನಾನು ವೃದ್ಧಾಪ್ಯ ಸಹಜವಾದ ನನ್ನ ತೊಂದರೆಗಳನ್ನು ಅವರಲ್ಲಿ ಹೇಳಿಕೊಂಡೆನಾದರೂ, ಬಿ.ಎಂ.ಶ್ರೀ. ಪ್ರತಿಷ್ಠಾನದ ಬಗೆಗೆ ನನಗಿರುವ ಗೌರವ ಮತ್ತು ಈ ಸಲದ ಪುರಸ್ಕಾರ ನನ್ನ ಆತ್ಮೀಯರೇ ಆದ ಪ್ರೊ. ಜಯಪ್ರಕಾಶಗೌಡರಿಗೆ ದೊರೆತ ಅಭಿಮಾನದಿಂದ ಒಪ್ಪಿಕೊಂಡೆ. ಈ ಪ್ರತಿಷ್ಠಿತ ಪುರಸ್ಕಾರವನ್ನು ಪ್ರದಾನ ಮಾಡಲು, ನನ್ನ ವಯಸ್ಸೊಂದನ್ನು ಬಿಟ್ಟರೆ, ನನಗೆ ಮತ್ತಾವುದೇ ಅರ್ಹತೆ ಇದೆ ಎಂದು ನಾನು ತಿಳಿದಿಲ್ಲ. ಏನೇ ಇರಲಿ, 'ನೆರೆಮನೆ ಮದುವೇಲಿ ನನ್ನ ಧಾರಾಳ ನೋಡು' ಎಂಬ ನಮ್ಮ ಜನಪದ ಗಾದೆಯಂತೆ, ನಮ್ಮ ಜಯಪ್ರಕಾಶಗೌಡರಿಗೆ ನಾನು ಬಿ.ಎಂ.ಶ್ರೀ. ಪ್ರತಿಷ್ಠಾನದ ಈ ಪುರಸ್ಕಾರವನ್ನು ಉದಾರವಾಗಿ ಪ್ರದಾನ ಮಾಡಿದ್ದೇನೆ. ಈ ಪುರಸ್ಕಾರ ಪಡೆದ ಗೌಡರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು,

ಇಂದಿನ ಸಮಾರಂಭ ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರ ಅಧ್ಯಕ್ಷತೆಯಲ್ಲೇ ನಡೆಯುತ್ತಿರುವುದು, ಪ್ರತಿಷ್ಠಾನದ ಹಿಂದಿನ ಅಧ್ಯಕ್ಷರೂ, ಹಿರಿಯ ವಿದ್ವಾಂಸರೂ, ಆತ್ಮೀಯರೂ ಆದ ಡಾ. ಪಿ.ವಿ. ನಾರಾಯಣ ಅವರು ಮುಖ್ಯ ಅತಿಥಿ ಆಗಿರುವುದು ಮತ್ತು ಡಾ. ಎಸ್. ಎಲ್. ಮಂಜುನಾಥ್ ಅವರು ಅಭಿನಂದನ ನುಡಿಗಳನ್ನು ಆಡುತ್ತಿರುವುದು ನನಗೆ ಹರ್ಷವುಂಟುಮಾಡಿದೆ. ಯಾರೇ ಒಬ್ಬ ವ್ಯಕ್ತಿಯ ಉತ್ತಮಿಕೆಯನ್ನು ಗುರುತಿಸಿ, ಆ ಉತ್ತಮಿಕೆಗೆ ಸಲ್ಲಬೇಕಾದ ಮಾನ-ಮನ್ನಣೆ ನೀಡಿ ಗೌರವಿಸುವುದು ಸಾಮಾನ್ಯ. ಆದರೆ ಅಂತಹ ಸನ್ಮಾನ, ಅಭಿನಂದನ, ಪ್ರಶಸ್ತಿ, ಪುರಸ್ಕಾರ ಇತ್ಯಾದಿಗಳ ಘನತೆ-ಗಾಂಭೀರ್ಯಗಳು ಇರುವುದು – ಅವುಗಳನ್ನು ನೀಡುವವರು ಯಾರು? ಪಡೆಯುವವರು ಯಾರು? ಎಂಬುದರ ಪರಿಗಣನೆಯನ್ನು ಆಧರಿಸಿ. ಎಷ್ಟೋ ಸಂದರ್ಭಗಳಲ್ಲಿ ಆ ಪರಿಗಣನೆಯು ಅವಗಣನೆಗೆ ಒಳಗಾಗಿರುವುದನ್ನು ನೀವೆಲ್ಲ ಗಮನಿಸಿರಬಹುದು. ಅಂತಲ್ಲಿ ನೀಡುವವರ ನಿರೀಕ್ಷೆ, ಪಡೆಯುವವರ ಪ್ರಯತ್ನಗಳು ಕೂಡಿಕೊಂಡಿರಬಹುದು. ಆದರೆ, ಇಂದಿನ ಸಂದರ್ಭ, ಪ್ರಶಸ್ತಿ ನೀಡುವ ಮತ್ತು ಪಡೆಯುವ ಎರಡೂ ದೃಷ್ಟಿಯಿಂದ ಪರಿಶುದ್ಧ ಮತ್ತು ಪ್ರತಿಷ್ಠಿತ ಪುರಸ್ಕಾರ ಪ್ರದಾನ. ಇದು ಸಹಜವಾಗಿಯೇ ಕನ್ನಡಿಗರಿಗೆಲ್ಲ ಅಭಿಮಾನವುಂಟುಮಾಡುವ ಸಂಗತಿ. ವಾಸ್ತವವಾಗಿ ಇಂತಹ ಪುರಸ್ಕಾರ ಎಂದರೆ, ಪುರಸ್ಕೃತ ವ್ಯಕ್ತಿ ಸಲ್ಲಿಸಿದ ಲೋಕಸೇವೆಗೆ ಕೃತಜ್ಞತೆಯೆಂದೇ ನಾನು ಭಾವಿಸುತ್ತೇನೆ.

ಕನ್ನಡ ಸಾಹಿತ್ಯ – ಸಂಸ್ಕೃತಿಗಳ ಸಂರಕ್ಷಣೆ, ಸಂಶೋಧನೆ ಮತ್ತು ಪ್ರಸಾರೋದ್ದೇಶಗಳಿಗಾಗಿಯೇ ಒಂದು ಸಂಘಟಿತ ವ್ಯವಸ್ಥೆ ಇರಬೇಕೆಂದು 1911ರಷ್ಟು ಹಿಂದೆಯೇ 'ಕನ್ನಡದ ಕಣ್ವ' ಬಿ.ಎಂ.ಶ್ರೀ. ಅವರು ಆಶಿಸಿದ್ದರು. ಆ ಆಶಯದ ಈಡೇರಿಕೆಯೇ ಪ್ರೊ. ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿದ ಬಿ.ಎಂ.ಶ್ರೀ. ಪ್ರತಿಷ್ಠಾನವು ಸಂಸ್ಥಾಪಕರ ಆಶಯದಂತೆ, ಸಂಕಲ್ಪದಂತೆ, ಇಂದು ಈ ಪ್ರತಿಷ್ಠಾನವು ಇಡೀ ನಾಡಿನ ಹೆಮ್ಮೆಯ ಸಾಂಸ್ಕೃತಿಕ ಸಂಸ್ಥೆಯಾಗಿ ಬೆಳೆದು, ಇನ್ನು ಆರೇಳು ವರ್ಷಗಳಲ್ಲಿ ತನ್ನ ಸುವರ್ಣ ಮಹೋತ್ಸವ ಆಚರಿಸುವಂತಾಗಿರುವುದು ನಿಜಕ್ಕೂ ಅಭಿಮಾನದ ಸಂಗತಿ.

– ೮ ನೇ ಪುಟಕ್ಕೆ

## ಸರ್. ಸಿ.ವಿ. ರಾಮನ್ ವಿಜ್ಞಾನ ಉಪನ್ಯಾಸ_ದತ್ತಿ ಸ್ಥಾಪಕರು
## ದಿ. ಶ್ರೀಮತಿ ಬಿ.ಜಿ.ಕುಸುಮ
### ಜನನ ೧೯೩೩ – ನಿಧನ ಸೆಪ್ಟಂಬರ್ ೨೦೨೧



ವಿಜ್ಞಾನ ಶಿಕ್ಷಣದಲ್ಲಿ ಅತೀವ ಶ್ರದ್ಧೆ ಮತ್ತು ಕಲೆಯಲ್ಲಿ ಅಪಾರ ಆಸಕ್ತಿ ಇವೆರಡರ ಸಾಂಗತ್ಯಕ್ಕೆ ದಿ.ಬಿ.ಜಿ.ಕುಸುಮಾ ಅವರ ವ್ಯಕ್ತಿತ್ವವೇ ಒಂದು ಉತ್ತಮ ಉದಾಹರಣೆ. ದಿ. ಬಿ.ಜಿ.ಕುಸುಮಾ ಅವರು ಇಪ್ಪತ್ತೈದು ವರ್ಷಗಳ ಕಾಲ ಮಕ್ಕಳಿಗೆ ಬೇಸಿಗೆ ವಿಜ್ಞಾನ ಶಿಬಿರಗಳನ್ನು ನಡೆಸಿದ್ದರು. ನಾಳೆಯ ಪೀಳಿಗೆಯಲ್ಲಿ ವೈಜ್ಞಾನಿಕ ಮನೋಭಾವವನ್ನು ಬಿತ್ತುವ ಹಂಬಲ ಹೊಂದಿದ್ದರು. ಹಾಗೆಯೇ ಪ್ರಸಿದ್ಧ ಗಮಕಿಗಳ ಕಾವ್ಯವಾಚನಕ್ಕೆ ವ್ಯಾಖ್ಯಾನ ಮಾಡುವ ಆಸಕ್ತಿ ಹೊಂದಿದ್ದರು.

ಶಿಕ್ಷಕಿ, ಸಂಘಟಕಿ, ವಿಜ್ಞಾನ ಪ್ರಚಾರಕಿ, ಸಾಮಾಜಿಕ ಕಾರ್ಯಕರ್ತೆ ಮತ್ತು ಕಾವ್ಯವಾಚನ ವ್ಯಾಖ್ಯಾನಕಾರ್ತಿ ದಿ.ಕುಸುಮಾ ಅವರು ಸದಾ ಜನರ ಒಳಿತನ್ನು ಬಯಸುತ್ತಿದ್ದರು. ಬಡ ಹೆಣ್ಣುಮಕ್ಕಳ ಶಿಕ್ಷಣಕ್ಕೆ, ಮಹಿಳೆಯರ ಆರೋಗ್ಯ ರಕ್ಷಣೆಗೆ ಸ್ಪಂದಿಸಲೆಂದೇ ಅವರು ಒಂದು ಸಾಮಾಜಿಕ ಸೇವಾ ಟ್ರಸ್ಟ್ ಸ್ಥಾಪಿಸಿದ್ದಾರೆ.

ವಿಜ್ಞಾನ ವಿಷಯಗಳನ್ನು ಕುರಿತು ಸರಳ ಭಾಷೆಯಲ್ಲಿ ಲೇಖನಗಳನ್ನು ಬರೆಯುತ್ತಿದ್ದ ಅವರು ಕನ್ನಡ ಮಹಾಕಾವ್ಯಗಳ ರಸಪ್ರಸಂಗಗಳನ್ನು ನಮ್ಮ ಮುಂದಿಟ್ಟದ್ದಾರೆ. ಮಕ್ಕಳ ಕಥೆಗಳ ಅವರ ಎರಡು ಸಂಗ್ರಹಗಳು, ಬದುಕಿಗೆ ಬೇಕಾದ ಸಂಗತಿಗಳನ್ನು ತಿಳಿಸಿಕೊಡುತ್ತವೆ. ಕುಸುಮಾ ಅವರ ಬಹುಮುಖ ಆಸಕ್ತಿಗೆ 'ವ್ಯಾಖ್ಯಾನ ವಿಶಾರದೆ' ಬಿರುದು, ಗಾರ್ಗಿ ಪ್ರಶಸ್ತಿ ಮತ್ತು ಎನ್‌ಸಿಇಆರ್‌ಟಿ ಪ್ರಶಸ್ತಿ ಮುಂತಾದವು ಸಂದಿವೆ.

**ದಿ. ಬಿ.ಜಿ.ಕುಸುಮಾ ಅವರು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಸರ್.ಸಿ.ವಿ. ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ ದತ್ತಿ ಮತ್ತು ದಿವಂಗತ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ಗಮಕ ಕಾರ್ಯಕ್ರಮ ದತ್ತಿ ಎಂಬ ಎರಡು ಪ್ರತ್ಯೇಕ ದತ್ತಿಗಳನ್ನು ಸ್ಥಾಪಿಸಿರುತ್ತಾರೆ.**




**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023 dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-10-2022**


೨ನೇ ಪುಟದಿಂದ

ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ಪ್ರತಿಷ್ಠಾನವು ನಡೆದುಬಂದ ಹಾದಿ ಸ್ಮರಣೀಯವಾದದ್ದು. ರಾಷ್ಟ್ರೀಯ ಹಸ್ತಪ್ರತಿ ಮಂಡಳಿ, ಕನ್ನಡ ವಿಶ್ವವಿದ್ಯಾಲಯದಂತಹ ವಿದ್ವತ್ ಸಂಸ್ಥೆಗಳ ಮಾನ್ಯತೆ, 188ಕ್ಕೂ ಹೆಚ್ಚು ಗ್ರಂಥಗಳ ಪ್ರಕಟಣೆ, 18 ಜನಕ್ಕೆ ಪಿಎಚ್.ಡಿ., 116 ಜನಕ್ಕೆ ಎಂ.ಫಿಲ್. ನೀಡಿಕೆ, ಸಾವಿರಕ್ಕೂ ಹೆಚ್ಚು ಓಲೆಗರಿಗಳ ಸಂಗ್ರಹ, ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದ ತರಬೇತಿ, ಕಾರ್ಯಾಗಾರ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ, 'ಕರ್ನಾಟಕ ಲೋಚನ' ವಿದ್ವತ್ ನಿಯತಕಾಲಿಕೆ ಪ್ರಕಟಣೆ, ದತ್ತಿ ಉಪನ್ಯಾಸಗಳು, ವಿವಿಧ ಸ್ಪರ್ಧೆಗಳು, ಸಾಹಿತ್ಯ ಸಂವಾದ, ನುಡಿಯಾರಾಧಕರ ಸ್ಮರಣೆ, 9ಕ್ಕೂ ಹೆಚ್ಚು ವಾರ್ಷಿಕ ಪ್ರಶಸ್ತಿ ಪ್ರದಾನ – ಹೀಗೆ ಕನ್ನಡ ಸಾಹಿತ್ಯ–ಸಂಸ್ಕೃತಿಗಳ ಗಾಂಭೀರ್ಯಗಳಿಗೆ ಸಲ್ಲುವ ವೈವಿಧ್ಯಪೂರ್ಣ ಕಾರ್ಯಗಳನ್ನು ನಡೆಸಿಕೊಂಡು ಬಂದಿರುವ ಬಿ.ಎಂ.ಶ್ರೀ. ಪ್ರತಿಷ್ಠಾನ ನಮ್ಮ ಕೆಲವು ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳು ಕಣ್ತೆರೆಯುವಂತೆ ಮಾಡಿದೆ ಎಂದರೆ ಕೇವಲ ಅಭಿಮಾನದ ಮಾತಲ್ಲ; ವಸ್ತು ಸಂಗತಿ.

"ಬರಹಗಾರನ ಬದುಕಿಗೂ ಅವನ ಬರಹಕ್ಕೂ ಯಾವ ಸಂಬಂಧವೂ ಇಲ್ಲ, ಕೃತಿ ವಿಮರ್ಶೆ ಕೃತಿಕಾರನ ಬದುಕನ್ನು ಅಗತ್ಯವಾಗಿ ಗಮನಿಸಬೇಕಾಗಿಲ್ಲ ಎನ್ನುವ ಒಂದು ಪಂಥವಿದೆ. ನಾನು ಆ ಪಂಥಕ್ಕೆ ಸೇರಿದವನಲ್ಲ. ಬರಹಗಾರನ ವ್ಯಕ್ತಿತ್ವ ನಿತ್ಯದ ಬದುಕು ಅವನ ಸಾಹಿತ್ಯದ ಮೇಲೆ ಮುದ್ರೆ ಒತ್ತುತ್ತದೆ" ಎಂದಿರುವ ಎಂ.ವಿ.ಸೀ. ಅವರು 'ಸಾಹಿತ್ಯ ಕಾರ್ಯದ ಬೀಜ ನನ್ನ ಬದುಕಿನ ಹುಟ್ಟಿನಲ್ಲಿ ಅಡಗಿದೆ' ಎಂದಿದ್ದಾರೆ. ಇಂತಹ ಒಳ–ಹೊರಗೊಂದಾಗಿದ್ದ ಸಂಕಲ್ಪಸಿದ್ಧ ವಿದ್ವಾಂಸರಿಂದ ಸ್ಥಾಪಿತವಾದ ಬಿ.ಎಂ.ಶ್ರೀ. ಪ್ರತಿಷ್ಠಾನ, ಹಾಗೆಯೇ ಪರಿಶುದ್ಧ ಪ್ರಗತಿಯನ್ನು ಸಾಧಿಸಿದೆ. 'ಬಿ.ಎಂ.ಶ್ರೀ.' ಎನ್ನುವ ಹೆಸರೇ ಕನ್ನಡದ ಮಂತ್ರವಾಗಿದೆ. ಸ್ಥಾಪಕ 'ಎಂ.ವಿ.ಸೀ' ಎನ್ನುವುದೇ ಕನ್ನಡದ ಆರಾಧನೆಯಾಗಿದೆ.

– **ಮುಂದುವರೆಯುತ್ತದೆ.**


**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**


**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ..........................................................................................

..........................................................................................

..........................................................................................


ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೯೯೭೨೮೧೨೧೨೬